# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 894 (559) |
| ಮಾನ್ಯ ಸದಸ್ಯರ ಹೆಸರು | ಶ್ರೀ ಬಿ.ಜಿ ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 28-09-2020 |
| ಉತ್ತರಿಸಬೇಕಾದ ಸಚಿವರು | ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕಲಬುರಗಿಯಲ್ಲಿ ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಗೆ 300 ಹಾಸಿಗೆ ಸಾಮಾರ್ಥಯದ ಪ್ರತ್ಯೇಕ ಆಸ್ಪತ್ರೆಯನ್ನು ನಿರ್ಮಿಸಲು ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ (ಕೆ.ಕೆ.ಡಿ.ಬಿ) ಯಿಂದ ಬಿಡುಗಡೆಯಾದ ರೂ.37.37 ಕೋಟಿಗಳಲ್ಲಿ ಯಾವ ಯಾವ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ.(ವಿವರ ನೀಡುವುದು) | ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ಕಲಬುರಗಿ ಶಾಖೆಯಲ್ಲಿ 300 ಹಾಸಿಗೆ ಸಾಮರ್ಥ್ಯದ ಪ್ರತ್ಯೇಕ ಆಸ್ಪತ್ರೆಯನ್ನು ನಿರ್ಮಿಸಲು ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಒಟ್ಟು ರೂ.37.37 ಕೋಟಿಗಳ ಹಣ ಬಿಡುಗಡೆಯಾಗಿದ್ದು, ಸದರಿ ಅನುದಾನದ ಪೈಕಿ ಆಸ್ಪತ್ರೆಯ ನಿರ್ಮಾಣದ ಕಾಮಗಾರಿಗಳಿಗೆ ಈ ಕೆಳಕಂಡಂತೆ ಹಣವನ್ನು ಪಾವತಿಸಲಾಗಿರುತ್ತದೆ. |

| ಕ್ರ. ಸಂ | ಹಣ ಪಾವತಿಸಲಾದ ವಿವರ | ಮೊತ್ತ ಲಕ್ಷ ರೂ. ಗಳಲ್ಲಿ |
|---|---|---|
| 1 | ಕಾಮಗಾರಿಯ ವಾಸ್ತುಶಿಲ್ಪಿ ಹಾಗೂ ವಿನ್ಯಾಸಗಾರರು ಇಲ್ಲಿಯವರೆಗೆ ಒದಗಿಸಿರುವ ಸೇವೆಗಳಿಗೆ ಒಂದನೇ ಆರ್.ಎ.ಬಿಲ್ ಶುಲ್ಕ | 36.54 |
| 2 | ಆಸ್ಪತ್ರೆ ಕಟ್ಟಡದ ನಿವೇಶನದಲ್ಲಿರುವ ಕೆಲವು ಮರಗಳನ್ನು ಕಡತಲೆ ಮಾಡಲು ಅನುಮತಿಗಾಗಿ ಅರಣ್ಯ ಇಲಾಖೆಗೆ (ಕಲಬುರಗಿ) ಪಾವತಿಸಿರುವ ಮೊತ್ತ | 1.54 |
| 3 | ಉದ್ದೇಶಿತ ಆಸ್ಪತ್ರೆ ಕಟ್ಟಡದ ನಕ್ಷೆಗಳ ಅನುಮೋದನೆಗಾಗಿ ಕಲಬುರಗಿ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಪಾವತಿಸಲಾದ ಶುಲ್ಕ | 16.02 |
| | ಒಟ್ಟು ಮೊತ್ತ | 54.10 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಆ) | 300 ಹಾಸಿಗೆಯ ಪ್ರತ್ಯೇಕ ಆಸ್ಪತ್ರೆಯು ಎಂದಿನಿಂದ ಸಾರ್ವಜನಿಕ ಸೇವೆಗೆ ಲಭ್ಯವಾಗಲಿದೆ? (ವಿವರ ನೀಡುವುದು) | ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ಕಲಬುರಗಿ ಶಾಖೆಯ ಶಂಕುಸ್ಥಾಪನೆಯನ್ನು ದಿನಾಂಕ:17.09.2020 ರಂದು ನೆರವೇರಿಸಲಾಗಿರುತ್ತದೆ. ಆಸ್ಪತ್ರೆ ಕಟ್ಟಡದ ಕಾಮಗಾರಿಗೆ ಸಂಬಂಧಿಸಿದಂತೆ ಗುತ್ತಿಗೆದಾರರನ್ನು ನೇಮಿಸಲು ಕೆ.ಟಿ.ಪಿ.ಪಿ ಕಾಯ್ದೆ, ಹಾಗೂ ಅದರ ನಿಯಮಗಳನ್ವಯ ಟೆಂಡರ್ ಕರೆದು ಎಲ್-1 ಬಿಡ್ ದಾರರ ಆರ್ಥಿಕ ಬಿಡ್ಡನ್ನು ಅನುಮೊದಿಸುವ ಪ್ರಸ್ತಾವನೆಯು ಪರಿಶೀಲನೆಯಲ್ಲಿರುತ್ತದೆ. ಹಾಗೂ ಪ್ರಸ್ತಾಪಿತ ಆಸ್ಪತ್ರೆಯನ್ನು ನಿರ್ಮಿಸಲು ಉದ್ದೇಶಿಸಿರುವ ನಿವೇಶನದಲ್ಲಿ ಹಾಲಿ ಇರುವ ಕಟ್ಟಡಗಳಲ್ಲಿ ಜಿಲ್ಲಾ ಆರೋಗ್ಯಾಧಿಕಾರಿಗಳ ಕಛೇರಿಗಳು ಕಾರ್ಯ ನಿರ್ವಹಿಸುತ್ತಿದ್ದು, ಸದರಿ ಕಛೇರಿಗಳು ಸ್ಥಳಾಂತರಗೊಂಡ ನಂತರದಲ್ಲಿ ನಿವೇಶನವನ್ನು ಗುತ್ತಿಗೆದಾರರಿಗೆ ಹಸ್ತಾಂತರಿಸಬೇಕಾಗಿರುವ ಹಿನ್ನಲೆಯಲ್ಲಿ ಸುಮಾರು 36 ತಿಂಗಳುಗಳಲ್ಲಿ ಉದ್ದೇಶಿತ ಆಸ್ಪತ್ರೆಯ ಕಟ್ಟಡವು ಸಾರ್ವಜನಿಕರ ಸೇವೆಗೆ ಲಭ್ಯವಾಗಲಿದೆ. |

**ಕಡತ ಸಂ: ಎಂಇಡಿ 346 ಎಂ ಎಸ್ ಎಫ್ 2020**

(ಡಾ: ಕೆ. ಸುಧಾಕರ್)

ವೈದ್ಯಕೀಯ ಶಿಕ್ಷಣ ಸಚಿವರು.